



ಶ್ರೀಃ

ಸ್ಕಾಂದಮಹಾಪುರಾಣದ ಸಹ್ಯಾದ್ರಿಖಂಡದೊಳಗಣ

# ತೀರ್ಥಕ್ಷೇತ್ರಮಾಹಾತ್ಮ್ಯವು

(ತೀರ್ಥಬೈಲು-ಪಾಂಡೇಶ್ವರ)



ಪ್ರಕಾಶಕ:

ಅರ್ಚಕ ಸುಬ್ರಾಯ ಅಡಿಗ

ರಾಮಕೃಷ್ಣ ಅಡಿಗ

1947

ಬೆಲೆ: [redacted] ೨

ಶ್ರೀಭಂಡಾರಕೇರಿಮಠಾಧೀಶ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು



ಶ್ರೀರಂಭಾಪುರಮಠಾಧೀಶ ಶ್ರೀಮದಾನಂದಾಶ್ರಮ ಶ್ರೀಪಾದಂಗಳವರು

# ಮುನ್ನುಡಿ

ಧರ್ಮಾಭಿಮಾನಿಗಳಾದ ಆಸ್ತಿಕ ಭಾರತೀಯರ ಉದ್ಧಾರಕ್ಕಾಗಿ ಅನೇಕ ದೇವತೆಗಳೂ, ಮಹರ್ಷಿಗಳೂ ಕರ್ಮಭೂಮಿಯಾದ ಈ ಭರತಖಂಡದಲ್ಲಿ ಅನೇಕ ತೀರ್ಥಕ್ಷೇತ್ರಗಳನ್ನು ಕಲ್ಪಿಸಿರುತ್ತಾರೆಂಬುದು ಸರ್ವರಿಗೂ ತಿಳಿಯದ ವಿಷಯವಲ್ಲ. ಅದರಂತೆ ಶ್ರೀಪರಶುರಾಮ ನಿರ್ಮಿತವಾದ ಈ ತೌಳವನಾಡಿನಲ್ಲಿ "ರೂಪ್ಯಪೀಠಂ ಕುಮಾರಾದ್ರಿಃ ಕುಂಭಾಸೀಚ ಧ್ವಜೇಶ್ವರಃ । ಕ್ರೋಡಗೋಕರ್ಣಮೂಕಾಂಬಾಃ ಸಪ್ತೈತೇ ಮೋಕ್ಷದಾಯಕಾಃ ॥" ಎಂಬಂತೆ ಸಪ್ತಕ್ಷೇತ್ರಗಳು ಪ್ರಸಿದ್ಧಗಳಾಗಿರುವುದು ಮಾತ್ರವಲ್ಲದೆ ರೂಪ್ಯಪೀಠ (ಉಡುಪಿ) ಕುಂಭಾಸಿಕ್ಷೇತ್ರಗಳ ನಡುವೆ ಪವಿತ್ರವಾದ ಸೀತಾನದಿಯ ಉತ್ತರ ದಡದಲ್ಲಿ ತೀರ್ಥಕ್ಷೇತ್ರ (ತೀರ್ಥಬೈಲು) ಎಂಬುದೊಂದು ಪುರಾಣಪ್ರಸಿದ್ಧ ಕ್ಷೇತ್ರವಿರುವುದನ್ನು ಕೇಳಿ, ಅದು ನಮ್ಮ ಮಠಕ್ಕೆ ಸಮೀಪವಿರುವುದರಿಂದ ಅದನ್ನು ನೋಡಬೇಕೆಂದು ಅಲ್ಲಿಗೆ ಹೋಗಿ, ಸ್ನಾನಮಾಡಿ ಅದರ ಪಶ್ಚಿಮದಡದಲ್ಲಿರುವ ಪಾಂಡವೇಶ್ವರನ ಸಂದರ್ಶನ ಮಾಡಿದೆವು. ಆ ಮೂರ್ತಿಯು, ಹರಿಹರಾತ್ಮಕವಾಗಿ ಬಲ ಪಾರ್ಶ್ವದಲ್ಲಿ ಚಕ್ರ ಪರಶು (ಕೊಡಲಿ) ಗಳಿಂದ ಕೂಡಿದ ಎರಡು ಹಸ್ತಗಳಿಂದಲೂ ಎಡಪಾರ್ಶ್ವದಲ್ಲಿ ಗದಾಶಂಖಗಳಿಂದ ಕೂಡಿದಎರಡು ಹಸ್ತಗಳಿಂದಲೂ ಕೂಡಿದುದಾಗಿರುತ್ತದೆ.

ಈ ಕ್ಷೇತ್ರದ ಇತಿಹಾಸವೇನೆಂದು ಅಲ್ಲಿನ ಅರ್ಚಕರಾದ ಶ್ರೀಯುತ ಸುಬ್ರಾಯ ಅಡಿಗರೆಂಬವರನ್ನು ಕೇಳಿದಾಗ, ತುಳು ಪ್ರತಿಯಲ್ಲಿರುವ ಕ್ಷೇತ್ರಮಾಹಾತ್ಮ್ಯವನ್ನು ತೋರಿಸಿದರು.

ಅದನ್ನು ಓದಿದಾಗ ಪಾಂಡವರು ವನವಾಸಿಗಳಾಗಿ ತೀರ್ಥಯಾತ್ರಾಪರರಾಗಿ ಈ ಸ್ಥಳಕ್ಕೆ ಬಂದಾಗ, ದ್ರೌಪದೀದೇವಿಯ ತೃಷಾಪರಿಹಾರಕ್ಕಾಗಿ ಭೀಮಸೇನನು ಗದಾಪ್ರಹಾರದಿಂದ ತೀರ್ಥವನ್ನು ನಿರ್ಮಿಸಿ, ಅಲ್ಲಿ ಅವರೆಲ್ಲರೂಸ್ನಾನಪಾನಾದಿಗಳನ್ನಾಚರಿಸಿ, ಸಜ್ಜನರನ್ನುದ್ಧರಿಸಲು ಈ ಹರಿಹರ ಮೂರ್ತಿಯನ್ನು ಪ್ರತಿಷ್ಠಿಸಿ ಪೂಜಿಸಿದರೆಂದೂ ಆ ಮೇಲೆ ಶ್ರೀಮಾರ್ಕಂಡೇಯ ಮುನಿಗಳು ಪೂಜಿಸಿದರೆಂದೂ ತಿಳಿದು

ಅತಿ ಪುರಾತನವಾದ ಈ ಕ್ಷೇತ್ರದ ಮಹಿಮೆಯನ್ನು ಸರ್ವರೂ ತಿಳಿದು ಅದನ್ನು ಸೇವಿಸಿ ಪುಣ್ಯಭಾಗಿಗಳಾಗುವಂತೆ ಮಾಡುವುದು ಉಚಿತವಾದುದರಿಂದ ಈ ಕ್ಷೇತ್ರಪುರಾಣವನ್ನು ಸಂಸ್ಕೃತವರಿಯದವರ ಸಲುವಾಗಿ ಕನ್ನಡತಾತ್ಪರ್ಯಾರ್ಥದೊಡನೆ ಭಾಷಾಂತರ ಗೊಳಿಸಿ ಪ್ರಕಟಿಸಬೇಕೆಂದು ನಾವು ಸೂಚಿಸಿದ್ದನ್ನು ಅರ್ಚಕ ಶ್ರೀಸುಬ್ರಾಯ ಅಡಿಗಳವರು ಆದರದಿಂದ ಒಪ್ಪಿ ಇದರ ಮುದ್ರಣಮಾಡಿಸಲು ಉದ್ಯೋಗಿಸಿದುದು ಶ್ಲಾಘ್ಯವಾಗಿದೆ.

ಆದರೆ ಈ ಅರ್ಚಕರು ದಾರಿದ್ರ್ಯದೋಷದಿಂದ ತಾವೇ ಮುದ್ರಣದ ಖರ್ಚನ್ನು ವಹಿಸಲು ಅಸಮರ್ಥರಾದುದರಿಂದ ಶ್ರದ್ಧಾಳುಗಳಾದ ಮಹನೀಯರ ಉದಾರಾಶ್ರಯವನ್ನು ಕೋರಿ ನಮ್ಮ ಬಳಿಯಲ್ಲಿ ಈ ವಿಷಯವನ್ನು ಸೂಚಿಸಿದುದರಿಂದ ಹಾಗೆ ಮಾಡಿಯಾದರೂ ಕೈಕೊಂಡ ಸತ್ಕಾರ್ಯವನ್ನು ಪೂರ್ತಿಗೊಳಿಸತಕ್ಕುದೆಂದು ನಮ್ಮ ಶಕ್ತ್ಯನುಸಾರ ಸಹಾಯ ಮಾಡುವ ವಾಗ್ದಾನಮಾಡಿರುತ್ತೇವೆ. ಉದಾರ ಹೃದಯರು ಈ ಸತ್ಕಾರ್ಯಕ್ಕೆ ಶಕ್ತಿಮೀರಿ ಸಹಾಯಮಾಡಿ ಈ ಅರ್ಚಕರ ಸದುದ್ದೇಶವನ್ನು ಸಾರ್ಥಕಗೊಳಿಸಿಯಾರೆಂದು ಆಶಿಸುತ್ತೇವೆ.

ಭಕ್ತ ಮಹಾಶಯರ ಉದಾರಾಶ್ರಯದಿಂದ ಈ ಕ್ಷೇತ್ರದ ಈ ಸತ್ಕಾರ್ಯವು ಪೂರ್ತಿಯಾಗುವ ಮೂಲಕ ಈ ಕ್ಷೇತ್ರವು ಸರ್ವಜನರಿಂದ ಸೇವಿಸಲ್ಪಟ್ಟು, ಪ್ರಸಿದ್ಧಿಯಾಗಿ ವೃದ್ಧಿ ಹೊಂದಿ, ಈ ಕ್ಷೇತ್ರ ಸ್ವಾಮಿಯಾದ ಶ್ರೀಪಾಂಡವೇಶ್ವರನು ಕರುಣಿಸುವಂತೆ ಆ ದೇವರನ್ನೂ ನಮ್ಮ ಆರಾಧ್ಯ ಶ್ರೀರಾಮದೇವರನ್ನೂ ಪ್ರಾರ್ಥಿಸುತ್ತೇವೆ.

ಪರಮಹಂಸೇತ್ಯಾದಿ ಉದಾರಾಶ್ರಿತರಾದ-

**ಶ್ರೀಭಂಡಾರಕೇರಿಮಠಾಧೀಶ**

**ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದಂಗಳವರು.**

# ಶ್ರೀರಂಭಾಪುರಮಠಾಧೀಶ ಶ್ರೀಮದಾನಂದಾಶ್ರಮ ಶ್ರೀಪಾದಂಗಳವರ ಸದಭಿಪ್ರಾಯ

ಈ ಜಗತ್ತಿನಲ್ಲಿ ಕರ್ಮಭೂಮಿಯೆನ್ನಿಸಿಕೊಂಡೀ ಭರತಖಂಡದಲ್ಲಿ ದೇವ-ಋಷಿನಿರ್ಮಿತಗಳಾದ ಪುಣ್ಯಾಶ್ರಮಗಳೂ, ದೇಗುಲಗಳೂ, ತೀರ್ಥಸ್ಥಳಗಳೂ ನಮ್ಮ ಪ್ರಾಚೀನರ ಆಸ್ತಿಕತ್ವವನ್ನು ಬೋಧಿಸುತ್ತಿವೆ. ಉತ್ತರದಲ್ಲಿ ಅಯೋಧ್ಯಾದಿ ಪುಣ್ಯಕ್ಷೇತ್ರಗಳಂತೆ ಭಾರ್ಗವ ಕ್ಷೇತ್ರದಲ್ಲಿ ರಜತಪೀಠಾದಿ ಸಪ್ತಕ್ಷೇತ್ರಗಳಿರುವ ಸಂಗತಿಯು ಸರ್ವವಿದಿತವಷ್ಟೆ.

ಅಂತಯೇ ಗಾಲವ ಮಾರ್ಕಂಡೇಯಾದಿ ಋಷಿಗಳು ವಾಸಿಸಿಕೊಂಡಿರುವ ಸೀತಾನದಿಯ ಉತ್ತರ ದಡದಲ್ಲಿ (ಪಾಂಡೇಶ್ವರ ಗ್ರಾಮದ) ತೀರ್ಥಕ್ಷೇತ್ರ (ತೀರ್ಥಬೈಲು) ಎಂಬ ಪ್ರಸಿದ್ಧಕ್ಷೇತ್ರವಿರುವುದು. ಇದರಲ್ಲಿ ಅಚ್ಛೋದಸರಸ್ಸಿನಂತಿರುವ ತೀರ್ಥತಟಾಕವೊಂದಿರುವುದು. ಈ ಪುಣ್ಯಕ್ಷೇತ್ರದಲ್ಲಿಯೇ ಹಿಂದೆ ನಮ್ಮ ಗುರುಗಳಾದ ಶ್ರೀನರಸಿಂಹಾಶ್ರಮ ಸ್ವಾಮಿಗಳವರು ಕಾಶೀಬ್ರಹ್ಮಾನಂದ ಸ್ವಾಮಿಗಳ ಹತ್ತಿರ ವೇದಾಂತ ಪಠನ ಮಾಡುತ್ತಾ ಕೆಲವು ಸಮಯ ನೆಲಸಿರುವ ಸಂಗತಿಯು ನಮ್ಮ ತಿಳುವಳಿಕೆಗೆ ಬಂದುದಲ್ಲದೆ ನಾವು ಕೂಡಾ ಈ ವರ್ಷ ಅಲ್ಲಿಗೆ ಹೋಗಿ ಆ ತೀರ್ಥದಲ್ಲಿ ಸ್ನಾನಮಾಡಿ ಅದರ ಪಶ್ಚಿಮಕ್ಕಿರುವ ಹರಿಹರಾತ್ಮಕನಾದ ಪಾಂಡವೇಶ್ವರನ ದರ್ಶನಮಾಡಿ ಅಲ್ಲಿನ ಅರ್ಚಕರಾದ ಸುಬ್ರಾಯಅಡಿಗರ ಮೂಲಕ ಆ ಕ್ಷೇತ್ರದ ಸ್ಥಳಪುರಾಣವನ್ನು ತರಿಸಿ, ಆಮೂಲಾಗ್ರವಾಗಿ ಓದಿನೋಡಿದೆವು.

ವನವಾಸಿಗಳಾದ ಪಾಂಡವರು ತೀರ್ಥಯಾತ್ರಾಪರರಾಗೀ ಕ್ಷೇತ್ರಕ್ಕೆ ಬಂದು ದ್ರೌಪದಿಯ ತೃಷಾಶಮನಗೈಯಲೋಸುಗ ಭೀಮನ ಗದೆಯ ಪ್ರಹಾರದಿಂದೀ ತೀರ್ಥವನ್ನು ನಿರ್ಮಿಸಿ, ಸ್ನಾನಪಾನಾದಿಗಳನ್ನಾಚರಿಸಿ, ಲೋಕೋದ್ಧಾರಕ್ಕಾಗಿ ಮೂರ್ತಿಪ್ರತಿಷ್ಠೆಯನ್ನು ಮಾಡಿದರೆಂದೂ, ಕ್ರಮೇಣ ಮಾರ್ಕಂಡೇಯಾದಿ ಋಷಿಗಳು ತೀರ್ಥಸ್ನಾನ ದೇವಾರ್ಚನೆಗಳನ್ನು ಮಾಡಿದರೆಂದೂ ಸ್ಥಳೇತಿಹಾಸದಿಂದ ತಿಳಿಯಲಾಗಿ ಈ ಕ್ಷೇತ್ರ

ಮಾಹಾತ್ಮೆಯನ್ನು ಸರ್ವರೂ ಸುಲಭವಾಗಿ ತಿಳಿಯುವಂತೆ ಕನ್ನಡ ತಾತ್ಪರ್ಯದೊಡನೆ ಪ್ರಕಟಿಸುವುದು ಯುಕ್ತವೆಂದು ಹೇಳಿದುದಕ್ಕೆ ಅರ್ಚಕ ಸುಬ್ರಾಯ ಅಡಿಗರು ಒಪ್ಪಿ ಇದರ ಮುದ್ರಣ ಕಾರ್ಯಕ್ಕೆ ಕೈ ಹಚ್ಚಿದುದು ಪ್ರಶಂಸನೀಯವಾಗಿದೆ.

ಅದಿರಲಿ; ಪ್ರಕೃತ ಜೀರ್ಣವಾದ ದೇವರ ಗರ್ಭಗೃಹ, ದೇವಸ್ಥಾನದ ಪೌಳಿ ಮೊದಲಾದುವುಗಳನ್ನು ಜೀರ್ಣೋದ್ಧಾರ ಮಾಡುವ ವಿಷಯದಲ್ಲಿ ಮಹನೀಯರಾದ ಉದಾರಿಗಳೆಲ್ಲರೂ ತನುಮನಧನಸಹಾಯ ಮಾಡು ವಿರಾಗಿ ನಂಬಿರುತ್ತೇವೆಯಲ್ಲದೆ ನಮ್ಮ ಮಠದಿಂದಲೂ ಯಥಾಶಕ್ತಿ ದ್ರವ್ಯಾಸಹಾಯ ಮಾಡಲಾಗಿದೆ.

ಉದಾರಚರಿತರೀಕಾರ್ಯಕ್ಕೆ ಶಕ್ತ್ಯನುಸಾರ ಧನಸಹಾಯ ಮಾಡಿ ಈ ಕ್ಷೇತ್ರವು ಸರ್ವಜನರಿಂದಲೂ ಸೇವಿಸಲ್ಪಟ್ಟು ಅತ್ಯಂತ ಪ್ರಸಿದ್ಧ ಹೊಂದುವರೆ ಕ್ಷೇತ್ರಾಧೀಶ್ವರನಾದ ಶಂಕರನಾರಾಯಣನು ಕರುಣಿಸು ವಂತೆ ಆ ದೇವನನ್ನೂ ನಮ್ಮ ಆರಾಧ್ಯದೇವರಾದ ಶ್ರೀನೃಹರಿಯನ್ನೂ ಪ್ರಾರ್ಥಿಸುತ್ತೇವೆ.

ವ್ಯಯ ಸಂ॥ದ ಆಷಾಢ ಶು ೯ ಯು.
ರವಿವಾಸರೇ, ವಸತಿಃ ಬಾಳೆಕುದ್ರು ಶ್ರೀಮಠೇ

॥ ಶ್ರೀಗಣಾಧಿಪತಯೇ ನಮಃ ॥

# ತೀರ್ಥಕ್ಷೇತ್ರಮಾಹಾತ್ಮ್ಯಮ್

## ಅಥ ಪ್ರಥಮೋಽಧ್ಯಾಯಃ

---

ಸ್ಕಂದ ಉವಾಚ:— ತ್ವಯಾ ಯದುಕ್ತಂ ಹಿ ಪುರಾ ಸ್ವಾಮಿನ್ ವೃಷಭವಾಹನ । ಸಹ್ಯಾದ್ರೇಃ ಪಶ್ಚಿಮೇ ಭಾಗೇ ಮೃಕಂಡುತನಯಾಶ್ರಮಮ್ ॥ ೧ ॥ ಸರ್ವಕ್ಷೇತ್ರೋತ್ತಮಮಿತಿ ತಸ್ಯೋದಂತಂ ವದಸ್ವ ಮೇ । ಕಿಂ ತಸ್ಯ ಸೇವನಾತ್ಪುಣ್ಯಂ ಕೇನ ತೀರ್ಥಂ ಪುರಾಕೃತಮ್ ॥ ೨ ॥ ಕೋ ದೇವೋಽಧಿಪತಿಸ್ತಸ್ಯ ಕ್ಷೇತ್ರಸ್ಯ ಚ ವದಸ್ವ ಮೇ । ಈಶ್ವರ ಉವಾಚ:— ದ್ವಾಪರೇ ತು ಪುರಾ ವತ್ಸ ಪಾಂಡವಾ ವನಚಾರಿಣಃ ॥ ೩ ॥ ಆ ಜಗ್ಮುರಾಶ್ರಮವರಂ ರಮ್ಯಂ ಪಾದಪಸಂಕುಲಮ್ । ಶೀತಾನಿಲಸುಖಸ್ಪರ್ಶಂ ಮತ್ತಾಲಿದ್ವಿಜಸಂಕುಲಮ್ ॥ ೪ ॥ ಮಯೂರಾರಾವಸಂಘುಷ್ಟಂ ಕೀರಕೋಕಿಲಕೂಜಿತಮ್ । ನಾನಾದ್ರುಮಲತಾಚ್ಛನ್ನಚ್ಛಾಯಾನ್ವಿತತಲಂ ಶುಭಮ್ ॥ ೫ ॥ ದೃಷ್ಟ್ವಾ ರಮ್ಯಾಶ್ರಮವರಂ ತಸ್ಥುಃ ಕೃಷ್ಣಾ ಸಮನ್ವಿತಾಃ । ಪತ್ನ್ಯಾ ಸಂಪ್ರಾರ್ಥಿತೋ ಭೀಮಃ ಜಲಂ ದೇಹೀತಿ ತತ್ಕ್ಷಣಾತ್ ॥ ೬ ॥ ಗದಾಭಿಘಾತೇನೈಕೇನ ಮಹತ್ ಖಾತಂ ಚಕಾರ ಹ । ದೃಷ್ಟ್ವಾ ನಿರ್ಮಲತೋಯಂ ತದ್ದಿವ್ಯಖಾತಂ ಚ ಪಾಂಡವಾಃ ॥ ೭ ॥ ಸಸ್ನುಃ ಪತ್ನ್ಯಾ ಸಮಂ ಸರ್ವೇ ಕೃತಸಂಧ್ಯಾದಿಸತ್ಕ್ರಿಯಾಃ । ಪೀತ್ವಾಹ್ಯಕರ್ದಮಂ ತೋಯಂ ವಿಶ್ರಮಾರ್ಥಂ ತದಾ ಸುತ ॥ ೮ ॥ ದೃಷ್ಟ್ವಾ ರಮ್ಯತಲೇ ತಸ್ಥುಃ ಸ್ನಿಗ್ಧಚ್ಛಾಯೇ ಮನೋಹರೇ । ತತಃ ಪ್ರಭೃತಿ ತತ್ತೀರ್ಥಂ ಗದಾತೀರ್ಥೇತಿ ವಿಶ್ರುತಮ್ ॥ ೯ ॥ ತತ್ಪುಣ್ಯತೀರ್ಥಂ ನಿರ್ಮಾಯ ಗೀತಾನದ್ಯಾಸ್ತಟೇ ಶುಭೇ । ಅವಿದೂರೇ ಚ ತೇ ವತ್ಸ ಮೂರ್ತಿಂ ಹರಿಹರಾತ್ಮಿಕಾಮ್ ॥ ೧ ॥ ಸಂಸ್ಥಾಪ್ಯ ತತ್ತೀರ್ಥತಟೇ ಜಗ್ಮುರನ್ಯತ್ರ ಪಾಂಡವಾಃ । ಪಾಂಡವೈಃ ಪೂಜಿತೋ ಯಸ್ಮಾತ್ತಸ್ಮಾ

ದ್ಯ್ರಾಮಸ್ಯ ಚೇಶ್ವರಃ । ತತೋಽಭೂದ್ವಲ್ಮೀಕಂ ತಸ್ಯಾಂ ಚಿರಾನ್ಮೂರ್ತೌ ಕ್ರಮಾತ್ಸ್ನತ ॥ ೧೨ ॥ ತದಂತರಾವಿಶತ್ಸರ್ಪಸ್ತಸ್ಯ ಕಾಲೋ ಮಹಾನ್ ಗತಃ । ತತಃ ಕದಾಚಿದಗಮನ್ಮಾರ್ಕಂಡೇಯೋ ಮಹಾಮುನಿಃ ॥ ೧೩ ॥ ದೃಷ್ಟ್ವಾ ರಮ್ಯಾಶ್ರಮಪದಂ ತೀರ್ಥಂ ಚ ವಿಮಲೋದಕಮ್ । ಉವಾಸಾತ್ರ ಋಷಿಶ್ರೇಷ್ಠೋ ಬಹುಕಾಲಂ ಮುದಾನ್ವಿತಃ ॥ ೧೪ ॥ ಪಾರ್ಥಿವೇಶ್ವರಪೂಜಾಂ ಚ ಚಕ್ರೇ ನಿತ್ಯಂ ಸುಭಕ್ತಿತಃ । ವಲ್ಮೀಕಾದಾಹರತ್ತಸ್ಮಾನ್ಮೃದಂ ಕರ್ತುಂ ಹಿ ಪಾರ್ಥಿವಮ್ ॥ ೧೫ ॥ ಲಿಂಗಂ ಚಾಂಗುಲಿಖಾತೇನ ತಸ್ಯ ಕ್ಷತಮಭೂನ್ಮುಖೇ । ತದ್ಬಹಿರ್ನಿಸ್ಸೃತಂ ರಕ್ತಂ ದೃಷ್ಟ್ವಾ ವಿಸ್ಮಯಮಾಗತಃ ॥ ೧೬ ॥ ವಲ್ಮೀಕಾಂತಃ ಕಿಮಸ್ತೀತಿ ದ್ರಷ್ಟುಂ ಚಕ್ರೇ ಮನೋ ಮುನಿಃ । ಸುಗಂಭೀರಂ ಬಿಲಂ ಚಕ್ರೇಹ್ಯಪಸಾರ್ಯ ಮೃದಂ ಬಹುಮ್ ॥ ೧೭ ॥ ತಸ್ಮಿನ್ ಬಿಲೇ ದದರ್ಶಾಸೌ ಮಹಾವ್ಯಾಲಂ ಮುನಿಸ್ತದಾ । ಅಂತಸ್ಸ್ಥಿತಂ ಮಹಾಸರ್ಪಂ ಸ್ತುತ್ವಾ ನಿಷ್ಕಾಸಯದ್ಬಹಿಃ ॥ ೧೮ ॥ ವಲ್ಮೀಕಂ ಶೋಧಯಿತ್ವಾದ್ಧಾ ಮೂರ್ತಿಂ ಹರಿಹರಾತ್ಮಿಕಾಮ್ । ನಖಕ್ಷತಾದ್ರಕ್ತಯುಕ್ತಮುಖಂ ಕಮಲಲೋಚನಮ್ ॥ ೧೯ ॥ ದೃಷ್ಟ್ವಾ ಸಂತಪ್ತಹೃದಯಸ್ತುಷ್ಟಾವ ಕರುಣಾನಿಧಿಮ್ । ನಾನಾವಿಧೈರ್ಮಂತ್ರಗಣೈಸ್ತಂ ದೇವಂ ಸಮತೋಷಯತ್ ॥ ೨೦ ॥ ವಿಧಿವತ್ಪೂಜಯಾಮಾಸ ಬಹುಕಾಲಮತಂದ್ರಿತಃ । ತದ್ದೇವನಿಕಟೇ ತಸ್ಯ ಮೂರ್ತಿಂ ಸರ್ಪಾಕೃತಿಂ ಮುನಿಃ ॥ ೨೧ ॥ ತಾಂ ಚಾಪಿ ಪೂಜಯಾಮಾಸ ದೇವೇನ ಸಹ ಸರ್ವದಾ । ದೇವಸ್ಯ ನಿಕಟೇ ಸರ್ಪೋಽಹ್ಯಶುದ್ಧ್ಯಾದಿರ್ಯದಾ ಭವೇತ್ ॥ ೨೨ ॥ ತದಾ ಸಂದೃಶ್ಯತೇ ವತ್ಸ ಋಷೇರಾಜ್ಞಾನುಸಾರತಃ । ಕದಾಚಿತ್ತನ್ಮುನೇಃ ಪೂರ್ಣಃ ಕಮಂಡಲುರಭಿದ್ಯತ ॥ ೨೩ ॥ ಕಮಂಡಲುಸ್ಥಮುದಕಂ ಗದಾತೀರ್ಥೇನ ಸಂಗತಮ್ । ತತ್ಕಮಂಡಲುತೀರ್ಥೇತಿ ಖ್ಯಾತಂ ಕಲಿಯುಗೇ ತತಃ ॥ ೨೪ ॥ ಶುಭನಾಮಯುತಂ ತೀರ್ಥಂ ಸರ್ವಾಘೌಘವಿನಾಶನಮ್ । ಸ್ನಾತ್ವಾ ತತ್ತೀರ್ಥಸಲಿಲೇ ಋಷಿರಭ್ಯರ್ಚಯನ್ ಹರಿಮ್ ॥೨೫॥ ಉವಾಸ ಸುಮಹತ್ಕಾಲಂ ತತ್ರೈವ, ಋಷಿ-

ಪುಂಗವಃ । ಬಹುಕಾಲಾದೃಷಿವರೋ ಜಗಾಮಾಸೌ ವನಾಂತ-
ರಮ್ ॥ ೨೬ ॥ ತತಃ ಕದಾಚಿದ್ರಾಜರ್ಷಿಸ್ತ್ವಗ್ರೋದ್ವೇಷೇಣ ಸಮ-
ನ್ವಿತಃ । ದೇವಾಪಿಃ ಖಿನ್ನಹೃದಯೋ ಜಗಾಮ ಗಹನಂ ವನಮ್॥
॥ ೨೭ ॥ ತಪಸ್ತಪ್ತುಂ ಮಹಾರಾಜ ಸಂಚರನ್ನಾಶ್ರಮಾಂತರಮ್ ।
ಏತದಾಶ್ರಮಮಾಪನ್ನೋ ಮಾರ್ಕಂಡೇಯಸ್ಯ ಚೋತ್ತಮಮ್ ॥
॥ ೨೮ ॥ ತತ್ರ ದೃಷ್ಟ್ವಾ ಹರಿಹರಂ ದೇವಂ ಸುಂದರವಿಗ್ರಹಮ್ ।
ತೀರ್ಥಂ ಚ ಪಾಪನಿರ್ಮೋಕಂ ಸಂಹೃಷ್ಟೋಽಹ್ಯಭವತ್ತದಾ ॥೨೯॥
ವೈಶಾಖೇ ಮೇಷಗೇ ಭಾನೌ ನವಮ್ಯಾಂ ಸಿತಪಕ್ಷಕೇ । ಆರಭ್ಯ
ಚಕ್ರೇ ರಾಜರ್ಷಿರುತ್ಸವಂ ಸುರಮಂದಿರೇ ॥ ೩೦ ॥ ಸ್ನಾತ್ವಾ
ತತ್ತೀರ್ಥಸಲಿಲೇ ಹರಿಶಂಕರವಿಗ್ರಹಮ್। ದೇವೇಶಂ ಪೂಜಯಾ-
ಮಾಸ ಭಕ್ತಿತೋ ದಿನಸಪ್ತಕಮ್ ॥ ೩೧ ॥ ವಿಮಲಾಂಗಸ್ತೇನ
ರಾಜಾ ವಾದ್ಯಘೋಷಸಮನ್ವಿತಮ್ । ಉತ್ಸವಂ ಕಾರಯಾ-
ಮಾಸ ರಂಗಪೂಜಾವಿಧಾನತಃ ॥ ೩೨ ॥ ರಥೋತ್ಸವಂ ತದಂತೇ
ಚ ಕೃತ್ವಾವಭೃಥಮಂಜಸಾ । ಸಂಪೂಜ್ಯ ದ್ವಿಜಸಂಘಾಂಶ್ಚ
ವಾಸೋಲಂಕಾರಭೂಷಣೈಃ ॥ ೩೩ ಗೃಹೀತ್ವಾಶೀರ್ವಚ
ಸ್ತೇಭ್ಯೋ ಭೇರೀಪಟಹನಿಸ್ಸ್ವನೈಃ । ವೀಣಾಮೃದಂಗಮುರಜ-
ಪಣವಾನಕಗೋಮುಖೈಃ ॥ ೩೪ ॥ ನಾನಾವಿಧೈರ್ವಾದ್ಯಘೋಷೈ-
ರ್ಮೌರೀಸುಸ್ವನಪೂರ್ವಕೈಃ । ಸಮಾಪ್ಯೋತ್ಸವಮನ್ಯತ್ರ ಹ್ಯಗಾ-
ದ್ರಾಜರ್ಷಿಸತ್ತಮಃ ॥ ೩೫ ॥ ತಸ್ಮಾತ್ತತ್ತೀರ್ಥಸಲಿಲೇ ಸ್ನಾನಾ
ತ್ತದ್ದೇವದರ್ಶನಾತ್ । ತತ್ಕಥಾಶ್ರವಣಾದ್ವಾಪಿ ಪುನರ್ಜನ್ಮ ನ
ವಿದ್ಯತೇ ॥ ೩೬ ॥ ತತ್ತೀರ್ಥಸ್ಯೋತ್ತರೇ ತೀರೇ ಮಹಾನಸ್ತಿ
ಸುಪುಣ್ಯಭೂಃ । ತಸ್ಯಾಂ ಪಿಂಡಪ್ರದಾನೇನ ಗಯಾಶ್ರಾದ್ಧಸಮಂ
ಭವೇತ್ ॥ ೩೭ ॥ ಯಮದೂತೈರ್ನಬಾಧ್ಯಂತೇ ನ ಗಚ್ಛಂತಿ
ಯಮಾಲಯಮ್ । ಸುರಲೋಕೇ ಸುರೈಸ್ಸಾಕಂ ತೇ ತಿಷ್ಠಂತಿ
ನ ಸಂಶಯಃ ॥ ೩೮ ॥ ಪುರಾ ಕಶ್ಚಿದ್ವಣಿಗ್ದುಷ್ಟಃ ಪ್ರಾಪ ತೇನೈವ
ಸದ್ಗತಿಮ್ । ಸ್ಕಂದ ಉವಾಚ:—ಕೋಽಸೌ ದುಷ್ಟೋ
ವಣಿಕ್ ಸ್ವಾಮಿನ್ ಕಥಂ ವಾ ಸದ್ಗತಿಂ ಗತಃ ॥ ೩೯ ॥ ಕಿಂ
ಕರ್ಮ ತಸ್ಯ ಮೇ ಬ್ರೂಹಿ ಕೃಪಾಲೋ ಕೃಪಯಾ ಮಯಿ ।

ಈಶ್ವರ ಉವಾಚ:—ಧನಿಕೋ ವಣಿಜಃ ಕಶ್ಚಿದ್ಧೀರದಾಸೇತಿ ವಿಶ್ರುತಃ ॥ ೪೦ ॥ ಬ್ರಹ್ಮಸ್ವಂ ದೇವತಾದ್ರವ್ಯಮುಪಹೃತ್ಯ ದಿವಾನಿಶಮ್ । ಸ್ವವೃತ್ತಿಂ ಕಲ್ಪಯಾಮಾಸ ದೇವಬ್ರಾಹ್ಮಣದೂಷಕಃ ॥ ೪೧ ॥ ಸ್ವಯಂ ಶೂದ್ರಾಂಗನಾಸಕ್ತಸ್ತಸ್ಯಾಮುತ್ಪಾದಯನ್ ಸುತಾನ್ । ವಿಷಯಾಂಧೋ ಧನಾಂಧಶ್ಚ ಶಠೋ ಲುಬ್ಧಶ್ಚ ವಂಚಕಃ ॥ ೪೨ ॥ ಧನಾಧಿಕ್ಯಮದೇನೈವ ನೋತ್ತಸ್ಥೌ ಸ ಬುಧಾಗಮೇ । ಪ್ರತಿಗ್ರಹಸ್ಯ ಯೋಗ್ಯೋಽತ್ರ ನಾಸ್ತಿ ಕಶ್ಚಿದ್ದ್ವಿಜೋಽಪಿ ವಾ ॥ ೪೩ ॥ ಇತಿ ಕುತ್ಸಿತಧೀಃ ಕ್ರೂರೋ ಧನಾರ್ಜನಪರಾಯಣಃ । ತೇನ ದೋಷೇಣ ಮಹತಾ ಆಯುಷಃ ಕ್ಷಯಮಾಪ್ಯ ಚ ॥ ೪೪ ॥ ಮಹಾವ್ರಣಸಮುದ್ಭೂತ ಕ್ರಿಮಿಸಂಕುಲಪೀಡಿತಃ । ಕಷ್ಟಾತ್ಪಂಚತ್ವಮಾಪನ್ನೋ ಯಮದೂತೈಶ್ಚ ಪೀಡಿತಃ ॥ ೪೫ ॥ ಅಕಳತ್ರೋಽಹ್ಯಪುತ್ರಶ್ಚ ಬಾಂಧವೈರ್ವರ್ಜಿತಸ್ತದಾ । ಜನ್ಮಾಂತರೀಯಪುಣ್ಯಸ್ಯ ಲೇಶತೋ ಜ್ಞಾತಿಭಿಸ್ತದಾ ॥ ೪೬ ॥ ಅಸ್ಯಾಂ ಭುವಿ ವಿಮುಕ್ತೋಽಭೂತ್ ತತ್ರೈವ ಕೃತಸತ್ಕ್ರಿಯಃ । ತೇನ ಪುಣ್ಯಪ್ರಭಾವೇಣ ಯಮದೂತಾನ್ನಿರಸ್ಯ ಚ ॥ ೪೭ ॥ ಸ್ವರ್ಗಲೋಕಂ ಜಗಾಮಾಸೌ ವಿಮಾನೇನಾರ್ಕವರ್ಚಸಾ । ಏವಂ ಸುಪುಣ್ಯಭೂಸ್ತಸ್ಯ ತೀರ್ಥಸ್ಯೋತ್ತರಭಾಗಕೇ ॥ ೪೮ ॥ ಕೂಲೇ ವಿರಾಜತೇ ಹ್ಯಂಗ ಪುಣ್ಯಲೋಕವಿಧಾಯಿನೀ । ತಸ್ಯಾಂ ಕೃತಂ ಚ ಯಚ್ಛ್ರಾದ್ಧಮನಂತಫಲದಂ ಭವೇತ್ ॥ ೪೯ ॥ ತದ್ದೇವಪುರತೋ ದೀಪಂ ಯಃ ಸ್ಥಾಪಯತಿ ಕಾರ್ತಿಕೇ । ಸ ಭುಕ್ತ್ವಾ ಭುವಿ ಭೋಗಾಂಶ್ಚ ಪಶ್ಚಾನ್ಮೋಕ್ಷಮವಾಪ್ನುಯಾತ್ ॥ ೫೦ ॥ ದೀಪಾವಳೀಭಿಃ ಪುರತೋ ಹ್ಯುತ್ಸವಂ ಕುರುತೇ ಯದಿ । ತಸ್ಯ ಪುಣ್ಯಫಲಂ ವಕ್ತುಂ ಶೇಷೇಣಾಪಿ ನ ಶಕ್ಯತೇ ॥ ೫೧ ॥ ರಥೋತ್ಸವಂ ಚಕಾರಾಸೌ ಯದಾ ರಾಜರ್ಷಿಸತ್ತಮಃ । ತದಾ ಜಗ್ಮುಃ ಸುರಗಣಾ ದ್ರಷ್ಟುಂ ಚೇಂದ್ರಪುರೋಗಮಾಃ ॥ ೫೨ ॥ ಸಮೇತ್ಯ ನಾಕನಾರೀಭಿಃ ಸಿದ್ಧಚಾರಣಕಿನ್ನರೈಃ । ಗಂಧರ್ವೈರಪ್ಸರೋಭಿಶ್ಚ 'ಸೂತಮಾಗಧಬಂದಿಭಿಃ ॥ ೫೩ ॥ ವಿಮಾನೈರಂಬರಗತಾ ಉತ್ಸವಂ ದದೃಶುರ್ಮುದಾ । ಉತ್ಸವಾಂತೇ ಪ್ರಹೃಷ್ಟಾಸ್ತೇ ಜಗ್ಮುಃ

ಸ್ವರ್ಲೋಕಕಮಂಬರಾತ್ ॥ ೫೪ ॥ ಕೃತೋತ್ಸವಶ್ಚ ದೇವಾಪಿಃ ಸುರಾನ್ವಿಪ್ರಾನತೋಷಯತ್ । ಪೂಜಾಭಿರ್ದಕ್ಷಿಣಾಭಿಶ್ಚ ಸುಭಕ್ತ್ಯಾ ವಂದನಾದಿಭಿಃ ॥ ೫೫ ॥ ಅಥ ಹೃಷ್ಟಾ ದ್ವಿಜಾಃ ಸರ್ವೇ ಹ್ಯಾಶೀರ್ಭಿರಭಿನಂದ್ಯ ಚ । ರಾಜಾನಮನುಜಗ್ಮುಸ್ತೇ ಗಚ್ಛಂತಂ ಪುರತೋಽಪ್ಸರಾಃ ॥ ೫೬ ॥ ನೃತ್ಯಂತೋಽಪ್ಯನುಜಗ್ಮುಸ್ತೇ ರಾಜಾ ಸಂಸ್ತುತಿಪಾಠಕಾಃ । ತಸ್ಮಾತ್ತತ್ತೀರ್ಥಸಂಸ್ನಾನಾದಚ್ಯುತಾ-ಧಾರಾಂಗದರ್ಶನಾತ್ ಶ್ರವಣಾತ್ಕ್ಷೇತ್ರನಾರ್ಥಾಯಾಃ ಪುನ-ರ್ಜನ್ಮ ನ ವಿದ್ಯತೇ ॥ ೫೭ ॥

ಇತಿ ಶ್ರೀಮತ್ಸಹ್ಯಾದ್ರೌ ರುದ್ರಸ್ಕಂದಸಂವಾದೇ ಮಾರ್ಕಂಡೇಯ-ಕ್ಷೇತ್ರಾನುವರ್ಣನಂ ನಾಮ ಪ್ರಥಮೋಽಧ್ಯಾಯಃ

---

## ದ್ವಿತೀಯೋಽಧ್ಯಾಯಃ

---

ಸ್ಕಂದ ಉವಾಚ:— ಕಸ್ಮಾದ್ವೈಶಾಖಮಾಸೇ ತು ರಾಜಾ ಚಕ್ರೇ ಮಹೋತ್ಸವಮ್ । ನವಮ್ಯಾಂ ಸಿತಪಕ್ಷೇ ಮೇ ವದಸ್ವ ಸುರಸತ್ತಮ ॥ ೧ ॥ ಈಶ್ವರ ಉವಾಚ:— ಶೃಣು ವತ್ಸ ಪ್ರವ-ಕ್ಷ್ಯಾಮಿ ತದ್ದಿನೋತ್ಸವಕಾರಣಮ್ । ಸುರಾಪಗಾಸನ್ನಿಧಾನಂ ತತ್ತೀರ್ಥೇ ದಿನಸಪ್ತಕೇ ॥ ೨ ॥ ಪುರಾ ಕಶ್ಚಿದ್ದ್ವಿಜಃ ಸಪ್ತದಿನ-ಸ್ನಾನಫಲೇನ ಹಿ । ಬ್ರಹ್ಮರಾಕ್ಷಸಯೋನಿಂ ಚ ಹಿತ್ವಾ ಮೋಕ್ಷ-ಮವಾಪ್ತವಾನ್ ॥ ೩ ॥ ಸ್ಕಂದ ಉವಾಚ:— ಕೋಽಸೌ ದ್ವಿಜಃ ಪುರಾ ಸ್ವಾಮಿನ್ ಕುಯೋನಿಂ ಕೇನ ಹೇತುನಾ। ಸಂಪ್ರಾಪ್ತವಾನ್ ಕಥಂ ಮೋಕ್ಷಮಭೂತ್ತಸ್ಯ ವದ ಪ್ರಭೋ ॥ ೪ ॥ ಈಶ್ವರಉವಾಚ– ನಾಮ್ನಾಸೌ ಕುಶಿಕಃ ಪೂರ್ವಂ ದೇವಲಂ ನಾಮ ಸದ್ವಿಜಮ್ । ವಿಷಚೂರ್ಣಪ್ರಯೋಗೇಣ ಸಂಹೃತ್ಯಾಪಹರದ್ಧನಮ್ ॥ ೫ ॥ ತೇನ ದೋಷೇಣ ಮಹತಾ ಪೀಡಿತೋ ರಾಜಯಕ್ಷ್ಮಣಾ ।

ಆಯುಷಃಕ್ಷಯಮಾಪನ್ನಃ ಪಂಚತ್ವಂ ಪ್ರಾಪ್ತವಾನ್ ದ್ರುತಮ್॥
॥ ೬ ॥ ಬ್ರಹ್ಮರಾಕ್ಷಸಯೋನಿಂ ಚ ಸಂಪ್ರಾಪ್ಯ ಗಹನೇ ವನೇ ।
ಶಾಲ್ಮಲೀವೃಕ್ಷಮಾಶ್ರಿತ್ಯ ಸಂಶ್ರಿತಃ ಕ್ಷುಧಯಾನಿಶಮ್ ॥ ೭ ॥
ಪೀಡಿತಸ್ತೃಷ್ಣಯಾ ಚಾಪಿ ಮಾರ್ಗಗಾನ್ ಸಮಪೀಡಯತ್ ।
ಧೇನೂರ್ಬಾಲಾಂಶ್ಚ ಸಂಹೃತ್ಯ ಮಾರ್ಗಂ ಶೂನ್ಯಜನಂ ವ್ಯಧಾತ್ ॥
॥ ೮ ॥ ಕದಾಚಿದೃಷಿವರ್ಯೋಽಸೌ ಗಾಲವಸ್ತೀರ್ಥಸೇವಕಃ ।
ಧರ್ಮಾರ್ಜನರತೋ ನಿತ್ಯಂ ತೀರ್ಥಯಾತ್ರಾಪ್ರಸಂಗತಃ ॥ ೯ ॥
ತೀರ್ಥಂ ತ್ವೇತದನುಪ್ರಾಪ್ತಃ ಸ್ನಾತ್ವೋತ್ತೀರ್ಯ ಜಲಾಶಯಾತ್।
ಕೃತ್ವಾ ನಿತ್ಯಾಹ್ನಿಕಂ ಸರ್ವಂ ದೇವರ್ಷಿ ಪಿತೃತರ್ಪಣಮ್ ॥ ೧೦ ॥
ಸಮಾಪ್ಯ ನಿರಗಾದ್ವಿಪ್ರೋ ಗಾಲವೋ ಧರ್ಮತತ್ಪರಃ । ಗಚ್ಛನ್
ಮಾರ್ಗೇ ಶ್ರಮಾಪನ್ನಶ್ಛಾಯಾಮಾಶ್ರಿತ್ಯ ಸಂಸ್ಥಿತಃ ॥ ೧೧ ॥
ಆಗತಃ ಶಾಲ್ಮಲೀವೃಕ್ಷಾದವತೀರ್ಯ ಮಹಾತನುಃ । ವ್ಯಾತ್ತಾಸ್ಯ-
ಸ್ತೀಕ್ಷ್ಣದಂಷ್ಟ್ರೋಗ್ರಃ ಪೀಡಿತುಂ ಮುನಿಸತ್ತಮಮ್ ॥ ೧೨ ॥
ಮುನಿಶ್ರೇಷ್ಠಸ್ಯ ಪುರತಃ ಸಂಸ್ಥಿತೋಽತ್ಯಂತಸನ್ನಿಧೌ । ತದಾ
ತಮೃಷಿವರ್ಯೋಽಸೌ ದೃಷ್ಟ್ವಾ ವಿಸ್ಮಯಮಾಗತಃ ॥ ೧೩ ॥
ಕಿಂಚಿದ್ಧ್ಯಾತ್ವಾ ಮುನಿವರಃ ಪ್ರೋಕ್ಷಯತ್ತೀರ್ಥಜಂ ಜಲಮ್ ।
ತತ್ಕಮಂಡಲುತೀರ್ಥಸ್ಯ ಸಂಸ್ಪರ್ಶಾದ್ಬ್ರಹ್ಮರಾಕ್ಷಸಃ ॥ ೧೪ ॥
ಜಾತಿಸ್ಮೃತಿರಭೂತ್ಸದ್ಯಃ ಪೂರ್ವಜನ್ಮಕೃತಂ ತತಃ । ಸ್ಮರನ್
ಪಾಹೀತಿ ಚುಕ್ರೋಶ ನನಾಮ ಶಿರಸಾ ಭುವಿ ॥ ೧೫ ॥ ಸಂಪ್ರಾರ್ಥ-
ಯದ್ದೀನಗಿರಾ ಕೃಪಾಳೋ ಮಾಂ ಸಮುದ್ಧರ ॥ ೧೬ ॥ ಗಾಲವ
ಉವಾಚ—ಃ ಕಸ್ತ್ವಂ ಕೇನ ವಿಪಾಕೇನ ಈದೃಗ್ರೂಪಮಭೂತ್ತವ।
ತ್ವಂ ಯಕ್ಷಃ ಕಿಂ ದಾನವೋ ವಾ ತಥ್ಯಂ ಬ್ರೂಹಿ ಮಮಾಗ್ರತಃ ॥
॥ ೧೭ ॥ ಬ್ರಹ್ಮರಾಕ್ಷಸ ಉವಾಚ—ಃ ಪುರಾಹಂ ಕುಶಿಕೋ ನಾಮ
ವಿಪ್ರೋ ದ್ರವ್ಯಾರ್ಜನೇ ರತಃ । ವೇದವೇದಾಂಗತತ್ತ್ವಜ್ಞೋ
ದೇವಲೋ ನಾಮ ವೈ ದ್ವಿಜಃ ॥ ೧೮ ॥ ದ್ರವ್ಯಂ ಕಷ್ಟೇನ
ಸಂಪಾದ್ಯ ಮದ್ಗೃಹೇ ನ್ಯಕ್ಷಿಪದ್ಧನಮ್ । ಮಯಿ ಸ್ನೇಹಾನ್ಮುನಿ
ವರೋ ಯದ್ದ್ರವ್ಯಂ ಕ್ಷಿಪ್ತವಾಂಶ್ಚ ಸಃ ॥ ೧೯ ॥ ತದ್ದ್ರವ್ಯಮಪ
ಹೃತ್ಯೈವ ಚೋರೈರೇವ ಹೃತಂ ತ್ವಿತಿ । ಖ್ಯಾಪಿತಂ ಜನಮಧ್ಯೇ ತು

ಮಯಾ ಕುತ್ಸಿತಬುದ್ಧಿನಾ ॥ ೨೦ ॥ ತೇನ ದೋಷೇಣ ಮಹತಾ ಪೀಡಿತೋ ರಾಜಯಕ್ಷ್ಮಣಾ । ಆಯುಷಃ ಕ್ಷಯಮಾಪನ್ನಃ ಪಂಚತ್ವಂ ಸಮವಾಪ್ಯ ಚ ॥ ೨೧ ॥ ಬ್ರಹ್ಮರಾಕ್ಷಸಯೋನಿಂ ಚ ಸಂಪ್ರಾಪ್ತೋಽಸ್ಮ್ಯಚಿರಾನ್ಮುನೇ । ಇದಾನೀಂ ಪುಣ್ಯಲೇಶೇನ ಮಮಾಭೂತ್ತವ ದರ್ಶನಮ್॥೨೨॥ಮಾಂ ಸಮುದ್ಧರ ವಿಪ್ರರ್ಷೇ ಕೃಪಾಳೋ ದೀನವತ್ಸಲ । ಇತಿ ಚುಕ್ರೋಶ ಪುರತೋ ಗಾಲವಸ್ಯ ಮಹಾತ್ಮನಃ ॥ ೨೩ ॥ ಶ್ರುತ್ವಾ ಸಕರುಣಂ ವಾಚಂ ಗಾಲವೋ ಧರ್ಮತತ್ಪರಃ । ಪರಯಾ ಕೃಪಯಾವಿಷ್ಟಸ್ತಮುದ್ಧರ್ತುಂ ಮನೋದಧೇ ॥ ೨೪ ॥ ವೈಶಾಖೇ ಶುಕ್ಲಪಕ್ಷಸ್ಯ ನವಮೀದಿನಮಾದಿತಃ । ಕೃತ್ವಾ ಮಯಾ ಪೌರ್ಣಮಾಂತಂ ಸ್ನಾತಂ ಯದ್ದಿನಸಪ್ತಕೇ ॥ ೨೫ ॥ ತತ್ಕಮಂಡಲುತೀರ್ಥೇ ಚ ಭಾಗೀರಥ್ಯಾ ಸಮನ್ವಿತೇ । ತತ್ಸಪ್ತದಿನಚೀರ್ಣಸ್ಯ ಸ್ನಾನಸ್ಯ ಫಲಮಸ್ಯ ವೈ ॥ ೨೬ ॥ ದಾಸ್ಯಾಮಿ ಮುಕ್ತಯೇ ತಸ್ಯೇತ್ಯೇವಂ ನಿಶ್ಚಿತಬುದ್ಧಿಮಾನ್ । ತಸ್ಮೈ ದದೌ ಮಹಾಪುಣ್ಯಂ ಜಲಂ ತಸ್ಯ ಕರೇಽಕ್ಷಿಪತ್॥ ॥ ೨೭ ॥ ತೇನ ಪುಣ್ಯಪ್ರಭಾವೇಣ ಪಿಶಾಚೋ ದಿವ್ಯರೂಪವಾನ್ । ನನಾಮ ಶಿರಸಾ ಭೂಯಃ ಪತಿತ್ವಾ ದಂಡವದ್ಭುವಿ ॥ ೨೮ ॥ ತುಷ್ಟಾವ ಋಷಿಶಾರ್ದೂಲಂ ಬಾಷ್ಪಗದ್ಗದಯಾ ಗಿರಾ ॥ ಭಾಗೀರಥೀ ಸ್ನಾನಪುಣ್ಯಫಲೇನ ಮಹತಾ ತದಾ । ಋಷೇರನುಗ್ರಹಾಚ್ಚೈವ ಸದ್ಯೋ ವಿಗತಕಲ್ಮಷಃ । ದಿವ್ಯಂ ವಿಮಾನಮಾರೂಢೋ ದಿವ್ಯಾಲಂಕಾರಭೂಷಿತಃ ॥ ೩೦ ॥ ಪಶ್ಯತಾಂ ಸರ್ವಲೋಕಾನಾಂ ಸ್ವರ್ಗಲೋಕಂ ಗತಃ ಪುರಾ । ಗಾಲವೋಽಪಿ ಮಹಾಪ್ರಾಜ್ಞೋ ಜಗಾಮಾನ್ಯತ್ರಸಂಚರನ್ ॥ ೩೧ ॥ ಯೇ ಸುಭಕ್ತ್ಯಾ ಜನಾ ವತ್ಸ ತತ್ಕಮಂಡಲುತೀರ್ಥಕೇ । ಸ್ನಾನಂ ಕುರ್ವಂತಿ ತೇ ಸರ್ವೇ ಬ್ರಹ್ಮಹತ್ಯಾದಿ ಪಾತಕೈಃ ॥ ೩೨ ॥ ಮುಚ್ಯಂತೇ ನಾತ್ರ ಸಂದೇಹೋ ಮೋದಂತೇ ವಿಷ್ಣುಮಂದಿರೇ ॥ ತಿಸ್ರಃ ಕೋಟ್ಯೋಽರ್ಧಕೋಟ್ಯಶ್ಚ ತೀರ್ಥಾನಿ ಸರಿತಶ್ಚ ಯಾಃ ॥ ೩೩ ॥ ಸನ್ನಿಧಾನಂ ಪ್ರಕುರ್ವಂತಿ ಸುಕಮಂಡಲುತೀರ್ಥಕೇ । ವೈಶಾಖೇ ಸಿತಪಕ್ಷಸ್ಯ ನವಮ್ಯಾಮಾರಭೇದ್ವ್ರತೀ ॥ ೩೪ ॥ ಸಮಾಪಯೇತ್ಪೌರ್ಣ-

ಮಾಯಾಂ ಸ್ನಾನದಾನಾದಿಕಾಃ ಕ್ರಿಯಾಃ । ಬ್ರಹ್ಮಾದಿದೇವತಾಃ ಸರ್ವಾಃ ಶಂಕರಾರ್ಧತನುಂ ಹರಿಮ್ ॥ ೩೫ ॥ ತೀರ್ಥಂ ಚ ಪೂಜಿತುಂ ಸ್ನಾತುಂ ವೈಶಾಖೇ ದಿನಸಪ್ತಕೇ । ತಸ್ಮಾತ್ಸಪ್ತದಿನೇ ಪುತ್ರಸ್ನಾನಂ ದಾನಂ ಚ ಯತ್ಕೃತಮ್ ॥ ೩೬ ॥ ತದನಂತಫಲಂ ಪ್ರೋಕ್ತಂ ಮರ್ತ್ಯಾನಾಂ ಮುಕ್ತಿದಂ ಕಲೌ ॥ ೩೭ ॥ ಸ್ನಾತ್ವಾ ಭೀಮಗದಾಭಿಜಾತ ಸರಸಿ ಶ್ರುತ್ವೇತಿಹಾಸಂ ಮುದಾ । ನತ್ವಾ ಶಂಕರಪದ್ಮನಾಭವಪುಷಂ ಸ್ತುತ್ವಾ ಪರಿಕ್ರಮ್ಯ ಚ । ದೃಷ್ಟ್ವಾ ತಸ್ಯ ಮಹೋತ್ಸವಂ ತ್ರಿಭಿರಘೋ ಮುಕ್ತೋ ಭವೇದ್ವೈಬುಣ್ಯೈಃ ಲಬ್ಧ್ವಾಭೀಷ್ಟಮನೋರಥಂ ಭುವಿ ತತೋ ಮುಕ್ತಿಂ ಪರಾಂ ಪ್ರಾಪ್ನುಯಾತ್ ॥ ೩೮ ॥

ಇತಿ ಶ್ರೀಮತ್ಸಹ್ಯಾದ್ರೌ ರುದ್ರಸ್ಕಂದಸಂವಾದೇ

ದುರ್ಯೋನಿಮೋಕ್ಷಕಥನಂ ನಾಮ ದ್ವಿತೀಯೋಽಧ್ಯಾಯಃ

॥ ಶ್ರೀಕೃಷ್ಣಾರ್ಪಣಮಸ್ತು ॥



# ಪ್ರಥಮಾಧ್ಯಾಯದ ತಾತ್ಪರ್ಯ

ಸುಬ್ರಹ್ಮಣ್ಯದೇವನು ತನ್ನ ತಂದೆಯಾದ ಮಹೇಶ್ವರನಲ್ಲಿ "ಎಲೌ ಸ್ವಾಮಿಯೇ! ಸಹ್ಯಪರ್ವತದ ಪಡುಭಾಗದಲ್ಲಿ ಕ್ಷೇತ್ರಗಳಲ್ಲೆಲ್ಲ ಶ್ರೇಷ್ಠವಾದ ಮಾರ್ಕಂಡೇಯಾಶ್ರಮವಿದೆಯೆಂದು ಪೂರ್ವದಲ್ಲಿ ಹೇಳಿರುವಿರಷ್ಟೆ, ಅದರ ಮಹಿಮೆಯನ್ನು ಹೇಳಿ"ಂದು ಬೆಸಗೊಳ್ಳಲು ಮಹೇಶ್ವರನೆಂದನು:– "ಮಗನೇ! ಕೇಳು. ದ್ವಾಪರಯುಗದಲ್ಲಿ ಪಾಂಡವರು ದ್ರೌಪದಿಯೊಡನೆ ವನವಾಸದಲ್ಲಿ ತಿರುಗುತ್ತ, ಕೋಗಿಲೆ ಗಿಳಿ ಮುಂತಾದವುಗಳಿಂದ ಸುಂದರವಾದ ಆಶ್ರಮವನ್ನು ಕಂಡಾಗ ದ್ರೌಪದಿಯು ನೀರು ಬೇಕೆಂದು ಬೇಡಲು ಭೀಮನು ಗದೆಯ ಒಂದೇ ಆಘಾತದಿಂದ ತೀರ್ಥವನ್ನು ನಿರ್ಮಾಣ ಮಾಡಿದನು. ನಿರ್ಮಲವಾದ ಆ ತೀರ್ಥದಲ್ಲಿ ಪತ್ನಿಯೊಡನೆ ಪಾಂಡವರು ಸ್ನಾನಮಾಡಿ ಸಂಧ್ಯಾವಂದನಾದಿ ವಿಧಿಯನ್ನಾಚರಿಸಿ ಆ ಜಲವನ್ನು ಕುಡಿದು ಅಲ್ಲಿ ವಿಶ್ರಮಿಸಿದುದರಿಂದ ಸೀತಾನದಿಯ ದಡದಲ್ಲಿರುವ ಆ ತೀರ್ಥವು ಗದಾತೀರ್ಥವೆಂದು ಪ್ರಖ್ಯಾತವಾಯಿತು.

ಆ ತೀರ್ಥದ ಬಳಿಯಲ್ಲಿ ಪಾಂಡವರು ಹರಿಹರ ಪ್ರತಿಮೆಯನ್ನು ಪ್ರತಿಷ್ಠೆಮಾಡಿ ಪೂಜಿಸಿ ಬೇರೆ ಕಡೆಗೆ ತೆರಳಿದಂದಿನಿಂದ ಪಾಂಡವರು ಪ್ರತಿಷ್ಠಿಸಿದ ಈಶ್ವರನು ಪಾಂಡವೇಶ್ವರನೆಂದೂ ಆ ಪ್ರದೇಶವು *ಪಾಂಡವೇಶ್ವರವೆಂದೂ ಪ್ರಸಿದ್ಧಿಗೊಂಡಿತು.

ಬಹುಕಾಲ ಕಳೆದ ಮೇಲೆ ಆ ಪ್ರತಿಮೆಯ ಮೇಲೆ ಹುತ್ತವು ಬೆಳೆದು ಆ ಹುತ್ತದಲ್ಲೊಂದು ಸರ್ಪವು ಆವಾಸಮಾಡಿಕೊಂಡಿದ್ದಿತು. ಆ ಮೇಲೆ ಮಾರ್ಕಂಡೇಯ ಮಹರ್ಷಿಗಳು ಸುಂದರವಾದ ಆ ಸ್ಥಳವನ್ನು ಕಂಡು, ನಿರ್ಮಲವಾದ ಆ ಗದಾತೀರ್ಥದಲ್ಲಿ ಮಿಂದು, ತಪಸ್ಸು ಮಾಡುತ್ತ, ಬಹುಸಮಯದಲ್ಲಿರುತ್ತ, ತಾನು ಪ್ರತಿದಿನ ಮಣ್ಣಿನಿಂದ ಲಿಂಗವನ್ನು ಮಾಡಿ ಪೂಜಿಸುತ್ತಿರುವ ಕಾರಣ ಒಂದು ದಿನ ಆ ಹುತ್ತದಿಂದ ಮಣ್ಣನ್ನು ಬೆರಳಿನಿಂದ ಕೆರಚಲು ಆ ಹೊಂಡದಿಂದ ರಕ್ತವು ಹೊರಚಿಮ್ಮಿದುದನ್ನು ಕಂಡು ಆಶ್ಚರ್ಯದಿಂದ ಅದರ ಕಾರಣವನ್ನು

---

* ಪಾಂಡವೇಶ್ವರವು ಈಗ ಪಾಂಡೇಶ್ವರವೆಂದು ಪ್ರಸಿದ್ಧಿಗೊಂಡಿದೆ.

ತಿಳಿಯಬೇಕೆಂದು ಮಣ್ಣನ್ನು ತೆಗೆಯುತ್ತಿರುವಾಗ ಅದರೊಳಗೆ ಮಹಾ ಸರ್ಪವನ್ನು ನೋಡಿ ಅದನ್ನು ಪ್ರಾರ್ಥಿಸಿ ಹೊರಗೆ ಬರುವಂತೆ ಮಾಡಿ ಮತ್ತೂ ಅಗೆದಾಗ ಹರಿಹರ ಪ್ರತಿಮೆಯ ತಲೆಯಿಂದ ರಕ್ತವು ಸುರಿಯುತ್ತಿದ್ದುದನ್ನು ಕಂಡು ಬಹಳ ಪಶ್ಚಾತ್ತಾಪದಿಂದ ಆ ದೇವರನ್ನು ಸ್ತುತಿಸಿ, ಆ ಸ್ಥಳವನ್ನು ಸರಿಪಡಿಸಿ, ಅಲ್ಲಿ ಅನೇಕ ವೈದಿಕಮಂತ್ರಗಳಿಂದ ಆ ಹರಿಹರಮೂರ್ತಿಯನ್ನು ಪೂಜಿಸಿ, ಆ ದೇವರ ಸಮೀಪದಲ್ಲಿಯೇ ಸರ್ಪ ಪ್ರತಿಮೆಯನ್ನು ಪ್ರತಿಷ್ಠೆಮಾಡಿ ಪೂಜಿಸುತ್ತ ಬಹುಕಾಲದಲ್ಲಿ ವಾಸ ಮಾಡುತ್ತಿದ್ದರು. ಆ ಮುನಿಗಳ ಆಜ್ಞೆಯಿಂದ ಆ ದೇವರ ಬಳಿ ಅಶುದ್ಧವಾದರೆ ಈಗಲೂ ಸರ್ಪವು ಕಣ್ಣಿಗೆ ತೋರುವುದು.

ಹೀಗಿರಲು ಒಂದು ದಿನ ಗಂಗಾಜಲವು ಆ ಮುನಿಗಳ ಕಮಂಡಲು (ಗಿಂಡಿ) ವಿನಲ್ಲಿ ತುಂಬಿ ಅದು ಒಡೆದು ಆ ಜಲವು ಗದಾತೀರ್ಥದಲ್ಲಿ ಸೇರಿದುದರಿಂದ ಕಲಿಯುಗದಲ್ಲಿ ಆ ತೀರ್ಥವು ಕಮಂಡಲು ತೀರ್ಥವೆಂದು ಹೆಸರುಗೊಂಡಿತು.

ಆ ಮುನಿಗಳು ಗಂಗಾಸಾನ್ನಿಧ್ಯದಿಂದ ಕೂಡಿದ ಆ ತೀರ್ಥದಲ್ಲಿ ಸ್ನಾನಮಾಡುತ್ತ, ಹರಿಹರಪೂಜೆ ಮಾಡುತ್ತ ಬಹು ಕಾಲವಿದ್ದು ಬೇರೆ ಕಡೆಗೆ ತೆರಳಿದರು.

ಆಮೇಲೆ *ದೇವಾಪಿ ಎಂಬ ರಾಜರ್ಷಿಯು ಕುಷ್ಠರೋಗದಿಂದ ಬಳಲುತ್ತ, ರಾಜ್ಯಸುಖವನ್ನು ತೊರೆದು, ಅರಣ್ಯಗಳಲ್ಲಿ ತಪಸ್ಸುಮಾಡುತ್ತ ದೈವಯೋಗದಿಂದ ಈ ಮಾರ್ಕಂಡೇಯಾಶ್ರಮಕ್ಕೆ ಬಂದು, ಇಲ್ಲಿನ ತೀರ್ಥವನ್ನೂ ಹರಿಹರದೇವರನ್ನೂ ಕಂಡು ಆನಂದಪಟ್ಟು, ಸೂರ್ಯನು ಮೇಷರಾಶಿಯಲ್ಲಿರುವಾಗ, ವೈಶಾಖ ಶುಕ್ಲಪಕ್ಷದ ನವಮೀತಿಥಿಯನ್ನಾರಂಭಿಸಿ ಪೂರ್ಣಿಮಾ ತನಕ ಏಳು ದಿನಗಳಲ್ಲಿ ಆ ತೀರ್ಥಸ್ನಾನ ಮಾಡುತ್ತ ಹರಿಹರದೇವರಿಗೆ ಸಪ್ತೋತ್ಸವವನ್ನು ನಡೆಸಿದ್ದನು. ರಂಗ

---

* ಈ ದೇವಾಪಿಯು ಪಾಂಡವರ ಅಜ್ಜನಾದ ಶಂತನು ಚಕ್ರವರ್ತಿಯ ಅಣ್ಣನಾದರೂ ಮುಂದಿನ ಯುಗ ಪರ್ಯಂತ ಜೀವಿಸತಕ್ಕವನಾದುದರಿಂದ ಪಾಂಡವರು ಮಾಡಿದ ಈ ಕ್ಷೇತ್ರಕ್ಕೆ ಬಂದನೆಂಬುದು ಅಯುಕ್ತವಲ್ಲ.

ಪೂಜೆ ರಥೋತ್ಸವ ಮೊದಲಾದ ವಿಧಿಗಳಿಂದ ವಾದ್ಯಘೋಷಗಳಿಂದ ಸಪ್ತೋತ್ಸವಸೇವೆಯನ್ನು ಮಾಡಿದುದುರಿಂದ ಆತನ ರೋಗವು ಪರಿಹಾರವಾಯಿತು.

ರಾಜನು ಆ ಉತ್ಸವದಲ್ಲಿ, ಬ್ರಾಹ್ಮಣಶ್ರೇಷ್ಠರನ್ನು ಅನ್ನದಾನಾದಿಗಳಿಂದ ತೃಪ್ತಿಪಡಿಸಿ ಅವಭೃಥಸ್ನಾನಾನಂತರ ಬೇರೆ ಕಡೆಗೆ ತೆರಳಿದನು. ಅದುಕಾರಣ ಈ ತೀರ್ಥಸ್ನಾನ ಹರಿಹರದರ್ಶನ ಈ ಕ್ಷೇತ್ರಕಥಾಶ್ರವಣ ಮಾಡಿದವರಿಗೆ ಸಂಸಾರದಲ್ಲಿ ಪುನರ್ಜನ್ಮವೇ ಬರಲಾರದು.

ಈ ತೀರ್ಥದ ಉತ್ತರಭಾಗದಲ್ಲಿರುವ ಪುಣ್ಯಸ್ಥಳದಲ್ಲಿ ಪಿಂಡಪ್ರದಾನಮಾಡಿದರೆ ಗಯಾಕ್ಷೇತ್ರದಲ್ಲಾಚರಿಸಿದ ಶ್ರಾದ್ಧಕ್ಕೆ ಸಮಾನವಾದುದು. ಯಮದೂತರ ಬಾಧೆಯೂ ಇರಲಾರದು. ಅವರು ಯಮನ ಮಂದಿರಕ್ಕೇ ಹೋಗದೆ ಸ್ವರ್ಗದಲ್ಲಿ ದೇವತೆಗಳೊಡನೆ ಬಹು ಕಾಲ ವಾಸಮಾಡುವರು. ಇದಕ್ಕೆ ದೃಷ್ಟಾಂತವು ಪೂರ್ವದಲ್ಲೊಬ್ಬ ವೈಶ್ಯನು ಅಲ್ಲಿ ನಡೆಸಿದ, ಕಾರ್ಯದಿಂದ ಸದ್ಗತಿಯನ್ನು ಹೊಂದಿದನೆಂಬುವುದೇ ಆಗಿದೆ., ಎಂದು ಮಹೇಶ್ವರನುಪದೇಶಿಸಿದಾಗ ಸ್ಕಂದನು "ಸ್ವಾಮಿಯೇ, ಆ ದುಷ್ಟ ವೈಶ್ಯನು ಯಾರು? ಹೇಗೆ ಸದ್ಗತಿಗೆ ತೆರಳಿದನು? ಅವನ ಕರ್ಮವೇನು? ದಯೆಯಿಟ್ಟು ಹೇಳಿ"ಎಂದು ಕೇಳಲು, ಮಹೇಶ್ವರನೆಂದನು—"ವೀರದಾಸನೆಂಬ ಧನಿಕ ವೈಶ್ಯನೊಬ್ಬನು ಬ್ರಾಹ್ಮಣರ ದ್ರವ್ಯ ದೇವದ್ರವ್ಯಗಳನ್ನು ಅಪಹರಿಸಿ ತನ್ನ ಜೀವನ ನಡೆಯಿಸುತ್ತ, ದೇವರ ಬ್ರಾಹ್ಮಣರ ನಿಂದೆಮಾಡುತ್ತ, ತಾನು ಶೂದ್ರಸ್ತ್ರೀಸಂಸರ್ಗಮಾಡಿಕೊಂಡು ಆಕೆಯಲ್ಲಿ ಸಂತಾನವನ್ನೂ ಕೂಡ ಹೊಂದಿ, ವಿಷಯಪರಾಧೀನನಾಗಿ, ಧನಮದಾಂಧನಾಗಿ, ಅತಿವಂಚಕನಾಗಿ, ಪಂಡಿತಶ್ರೇಷ್ಠರಾದ ಬ್ರಾಹ್ಮಣೋತ್ತಮರು ಬಂದರೂ ತಾನು ಎದ್ದು ನಿಲ್ಲದೆ ದಾನತೆಗೆದುಕೊಳ್ಳಲಿಕ್ಕೆ ಯೋಗ್ಯರೇ ಇಲ್ಲಿಲ್ಲವೆಂದು ಆ ದುರ್ಬುದ್ಧಿಯು ಹೇಳಿಕೊಂಡು ದ್ರವ್ಯವನ್ನು ಗಳಿಸುತ್ತಿದ್ದುದರ ಮಹಾಪಾಪದಿಂದ ಆಯುಸ್ಸು ಕ್ಷೀಣವಾಗಿ, ಮೈಯಲ್ಲೆಲ್ಲ ಹುಣ್ಣುಗಳಾಗಿ, ಅವುಗಳಲ್ಲಿ ಹುಳುಗಳುಂಟಾಗಿ, ಕಷ್ಟದಿಂದ ನರಳಿ ಸತ್ತು ಯಮದೂತರು ಕೊಡುವ ಕಷ್ಟಗಳನ್ನು ಅನುಭವಿಸುತಿದ್ದನು.

ಜನ್ಮಾಂತರದಲ್ಲಿ ಹೆಂಡತಿಮಕ್ಕಳುಇಲ್ಲದವನಾಗಿ, ಹುಟ್ಟಿ,ಜನ್ಮಾಂತರದ ಪುಣ್ಯದಿಂದ ಆತನನ್ನು ಬಂಧುಗಳು ಈ ಪಾಂಡವೇಶ್ವರಕ್ಷೇತ್ರದಲ್ಲಿ ಬಿಟ್ಟ ಕಾರಣ ಆ ಕ್ಷೇತ್ರದಲ್ಲಿ ಸ್ನಾನಾದಿಸತ್ಕರ್ಮಗಳನ್ನಾಚರಿಸಿದ ಪುಣ್ಯದಿಂದ ಸೂರ್ಯನಂತೆಸೆವ ವಿಮಾನದಿಂದ ಸ್ವರ್ಗಕ್ಕೆ ಪ್ರಯಾಣ ಮಾಡಿದನು.

ಈ ಪಾಂಡವೇಶ್ವರಕ್ಷೇತ್ರತೀರ್ಥದ ಉತ್ತರಭಾಗದ ಭೂಮಿಯು ಸದ್ಗತಿಯನ್ನು ಕೊಡತಕ್ಕದಾದ ಪ್ರಯುಕ್ತ ಅಲ್ಲಿ ಮಾಡಿದ ಶ್ರಾದ್ಧವು ಅನಂತಪುಣ್ಯಫಲಪ್ರದಾಯಕವು.

ಕಾರ್ತಿಕಮಾಸದಲ್ಲಿ ಆ ಹರಿಹರದೇವರಿದಿರು ದೀಪವನ್ನಿಟ್ಟರೆ, ದೀಪೋತ್ಸವ ಮಾಡಿದರಂತೂ, ಅದರ ಪುಣ್ಯವಿಷ್ಟೆಂದು ಹೇಳಲು ಶೇಷದೇವನೂ ಸಮರ್ಥನಲ್ಲ.

ಈ ಕ್ಷೇತ್ರದಲ್ಲಿ ದೇವಾಪಿಯು ರಥೋತ್ಸವಮಾಡಿಸಿದಾಗ ಗಂಧರ್ವರೂ,ಅಪ್ಸರಸ್ತ್ರೀಯರೂ,ಸಿದ್ಧರೂ, ಕಿನ್ನರರೂ, ಚಾರಣರೂ, ಇಂದ್ರಾದಿ ದೇವತೆಗಳೂ ಕೂಡ ವಿಮಾನವನ್ನೇರಿ, ಆಕಾಶದಲ್ಲಿ ನಿಂತುನೋಡಿ ಆನಂದದಿಂದ ಉತ್ಸವವಾದ ಮೇಲೆ ತೆರಳಿರುವರು. ಬ್ರಾಹ್ಮಣರ ಆಶೀರ್ವಾದ ಪಡೆದು ರಾಜನು ಹೋಗುತ್ತಿರುವಾಗ ಅಪ್ಸರ ಸ್ತ್ರೀಯರು ಆತನ ಕೀರ್ತಿಯನ್ನು ಗಾನಮಾಡಿರುತ್ತಾರೆ. ಅದುಕಾರಣ ಈ ತೀರ್ಥಸ್ನಾನ, ದೇವದರ್ಶನ, ಕಥಾಶ್ರವಣಗಳು ಪುಣ್ಯಪ್ರದಗಳು.

ಪ್ರಥಮಾಧ್ಯಾಯದ ತಾತ್ಪರ್ಯವು ಸಂಪೂರ್ಣವು.

---

## ದ್ವಿತೀಯಾಧ್ಯಾಯದ ತಾತ್ಪರ್ಯ

---

ಸ್ಕಂದನು—"ಆ ರಾಜನು ವೈಶಾಖಶುಕ್ಲಪಕ್ಷದ ನವಮಿಯಿಂದ ವರೆಗೆ ದಿನಗಳ ಉತ್ಸವ ನಡೆಸಲು ಕಾರಣವೇನೆ"ಂದು ಕೇಳಲು ಮಹೇಶ್ವರನೆಂದನು—"ಮಗನೇ, ಕೇಳು. ಆ ಏಳು ದಿನಗಳಲ್ಲಿ ಗಂಗಾತೀರ್ಥದ

ಸನ್ನಿಧಾನವು ಇರುತ್ತದೆ. ಪೂರ್ವದಲ್ಲಿ ಒಬ್ಬ ಬ್ರಾಹ್ಮಣನು ಈ ತೀರ್ಥದಲ್ಲಿ ಏಳು ದಿನಗಳ ಸ್ನಾನದಿಂದ ಬ್ರಹ್ಮರಾಕ್ಷಸಜನ್ಮವನ್ನು ಬಿಟ್ಟು ಮೋಕ್ಷವನ್ನು ಹೊಂದಿರುತ್ತಾನೆ. ಸ್ಕಂದನೆಂದನು—"ಆ ಬ್ರಾಹ್ಮಣನು ಯಾರು? ಬ್ರಹ್ಮರಾಕ್ಷಸನು ಹೇಗಾದನು? ಮೋಕ್ಷವನ್ನು ಹೇಗೆ ಹೊಂದಿದನು? ಎಂಬುದನ್ನು ಹೇಳೆ"ನ್ನಲು ಮಹೇಶ್ವರನೆಂದನು—

"ಪೂರ್ವದಲ್ಲಿ ಕುಶಿಕನೆಂಬ ಬ್ರಾಹ್ಮಣನು ದೇವಲನೆಂಬ ಶ್ರೇಷ್ಠ ಬ್ರಾಹ್ಮಣನನ್ನು ವಿಷಕೊಟ್ಟು ಕೊಂದು, ಆತನ ದ್ರವ್ಯವನ್ನು ಅಪಹರಿಸಿದ ಪಾಪದಿಂದ ಬ್ರಹ್ಮರಾಕ್ಷಸನಾಗಿ, ಗೊಂಡಾರಣ್ಯದಲ್ಲಿ ಬೋರದ ಹತ್ತಿಯ ಮರವನ್ನಾಶ್ರಯಿಸಿರುತ್ತ, ಹಸಿವು ತೃಷೆಗಳಿಂದ ದಾರಿಗರನ್ನೂ, ಗೋವುಗಳನ್ನೂ, ಬಾಲಕರನ್ನೂ ಕೊಂದು ಆ ದಾರಿಯಲ್ಲಿ ಯಾರೂ ಇಲ್ಲದಂತೆ ಮಾಡುತ್ತಿದ್ದನು.

ಒಂದು ಸಮಯದಲ್ಲಿ ಗಾಲವ ಮಹರ್ಷಿಗಳು ತೀರ್ಥಯಾತ್ರೆ ಮಾಡುತ್ತ ಈ ಕ್ಷೇತ್ರಕ್ಕೆ ಬಂದು ಇಲ್ಲಿನ ತೀರ್ಥದಲ್ಲಿ ಮಿಂದು, ದೇವ ಋಷಿ ಪಿತೃತರ್ಪಣ ಮೊದಲಾದ ನಿತ್ಯಾಹ್ನಿಕವನ್ನು ಮಾಡಿ, ಆ ಬ್ರಹ್ಮರಾಕ್ಷಸನಿರುವ ಸ್ಥಳಕ್ಕೆ ಬಂದು ಆ ಶಾಲ್ಮಲೀವೃಕ್ಷದ ಬುಡದಲ್ಲಿ ನೆರಳಿಗಾಗಿ ನಿಂತರು. ಅಷ್ಟರಲ್ಲಿ ಮಹಾಶರೀರವುಳ್ಳ ಬ್ರಹ್ಮರಾಕ್ಷಸನು ಮರದಿಂದಿಳಿದು ಬಾಯಿತೆರೆದುಕೊಂಡು, ತೀಕ್ಷ್ಣಗಳಾದ ಕೋರೆದಾಡೆಗಳಿಂದ ಭಯಂಕರವಾಗಿ ಮಹರ್ಷಿಗಳನ್ನು ಪೀಡಿಸಲು ಅತಿ ಸಮೀಪಕ್ಕೆ ಬಂದು ನಿಲ್ಲಲು, ಮುನಿವರರು ಆತನನ್ನು ಕಂಡು ಆಶ್ಚರ್ಯದಿಂದ ಈತನ ವಿಷಯವನ್ನು ಧ್ಯಾನದೃಷ್ಟಿಯಿಂದ ತಿಳಿದು, ತನ್ನ ಕಮಂಡಲುವಿನಲ್ಲಿರುವ ಗದಾತೀರ್ಥವನ್ನು ಆತನಿಗೆ ಪ್ರೋಕ್ಷಿಸಿದರು.

ಆ ತೀರ್ಥಸ್ಪರ್ಶಮಾತ್ರದಿಂದ ಆ ಬ್ರಹ್ಮರಾಕ್ಷಸನಿಗೆ ಪೂರ್ವ ಜನ್ಮಸ್ಮರಣವುಂಟಾಗಿ ತನ್ನ ಹಿಂದಿನ ಪಾಪವನ್ನು ನೆನೆದು 'ಮಹರ್ಷಿಯೇ ಉದ್ಧರಿಸೆ'ಂದು ಆತನ ಪಾದಗಳಲ್ಲಿ ಬಿದ್ದನು.

ಆಗ ಗಾಲವರು—'ನೀನಾರು? ಯಕ್ಷನೋ? ದಾನವನೋ? ಯಾವ ದುಷ್ಕರ್ಮದಿಂದ ಈ ದುರವಸ್ಥೆಯು ನಿನಗೆ ಒದಗಿದೆ? ಸ[illegible]ವಾಗಿ ಹೇಳೆ'ನ್ನಲು ಬ್ರಹ್ಮರಾಕ್ಷಸನೆಂದನು—

'ಪೂರ್ವದಲ್ಲಿ ಕುಶಿಕನೆಂಬ ಬ್ರಾಹ್ಮಣಜಾತಿಯುವನಾದ ನಾನು ದ್ರವ್ಯಾರ್ಜನೆಯಲ್ಲಿಯೇ ಆಸಕ್ತನಾಗಿದ್ದೆನು. ವೇದವೇದಾಂಗಗಳ ತತ್ತ್ವವನ್ನರಿತ ದೇವಲನೆಂಬ ಬ್ರಾಹ್ಮಣಶ್ರೇಷ್ಠನು ಕಷ್ಟದಿಂದ ಗಳಿಸಿದ ದ್ರವ್ಯವನ್ನು ಸ್ನೇಹದಿಂದ ನನ್ನಲ್ಲಿಟ್ಟನು. ಆತನನ್ನು ಕೊಂದು ಆ ಹಣವನ್ನಪಹರಿಸಿ, ಕಳ್ಳರು ಆ ಹಣವನ್ನು ಅಪಹರಿಸಿದರೆಂದು ಜನರ ನಡುವೆ ಪ್ರಖ್ಯಾತಿಪಡಿಸಿದ ಪಾಪದಿಂದ ಬ್ರಹ್ಮರಾಕ್ಷಸನಾಗಿರುವೆನು. ಯಾವುದೋ ಪುಣ್ಯಲೇಶದಿಂದ ತಮ್ಮದರ್ಶನವು ನನಗೆ ದೊರಕಿರುತ್ತದೆ. ದೀನವತ್ಸಲರಾದ ದಯಾಳುಗಳೇ! ನನ್ನನ್ನುದ್ಧರಿಸಿರಿ.' ಎಂದು ಅವರ ಇದಿರು ಮೊರೆಯಿಡಲು ಆತನ ಕರುಣವಚನದಿಂದ ಮನಸ್ಸು ಕರಗಿ ಆತನನ್ನು ಉದ್ಧರಿಸಲು ತಾವು ಪಾಂಡವೇಶ್ವರ ಕ್ಷೇತ್ರದಲ್ಲಿ ವೈಶಾಖಪೂರ್ಣಿಮಾಂತ ಏಳುದಿನಗಳಲ್ಲಿ ಗಂಗಾಸಾನ್ನಿಧ್ಯವಿರುವ ಕಮಂಡಲುತೀರ್ಥದಲ್ಲಿ ಸ್ನಾನಮಾಡಿದ ಪುಣ್ಯರಾಶಿಯನ್ನು ಈತನಿಗೆ ದಾನಮಾಡುವೆನೆಂದು ಆಲೋಚಿಸಿ, ಆ ಪುಣ್ಯವನ್ನು ಧಾರಾಪೂರ್ವಕವಾಗಿ ಆತನ ಕೈಯಲ್ಲಿ ದಾನ ಮಾಡಿದರು.

ಆ ಪುಣ್ಯಪ್ರಭಾವದಿಂದ ಕೂಡಲೆ ಬ್ರಹ್ಮರಾಕ್ಷಸರೂಪವನ್ನು ತೊರೆದು, ದಿವ್ಯರೂಪವನ್ನು ತಾಳಿ, ಮಹರ್ಷಿಗಳ ಪಾದದಲ್ಲಿ ವಂದಿಸಿ, ದಿವ್ಯವಿಮಾನವನ್ನೇರಿ ಸರ್ವರೂ ನೋಡುತ್ತಿರುವಂತೆ ಸ್ವರ್ಗಕ್ಕೆ ತೆರಳಿದನು. ಗಾಲವರೂ ಬೇರೆ ಕಡೆಗೆ ಹೋದರು.

ಮಗನೇ! ಈ ಕಮಂಡಲುತೀರ್ಥದಲ್ಲಿ ಸ್ನಾನಮಾಡತಕ್ಕವರು ವೈಕುಂಠವನ್ನೇ ಸೇರುವರು. ಮೂರುವರೆಕೋಟಿ ತೀರ್ಥಗಳೂ ಗಂಗಾದಿ ಪುಣ್ಯನದಿಗಳೂ ಈ ಕಮಂಡಲು ತೀರ್ಥದಲ್ಲಿ ಸನ್ನಿಧಾನವನ್ನಿಟ್ಟಿರುತ್ತವೆ.

ಆದುದರಿಂದ ಇಲ್ಲಿ ಸ್ನಾನವ್ರತವನ್ನಾಚರಿಸತಕ್ಕವನು ವೈಶಾಖ ಶುಕ್ಲಪಕ್ಷದ ನವಮಿಾದಿನ ಸಂಕಲ್ಪಪೂರ್ವಕ ಸ್ನಾನವನ್ನಾರಂಭಿಸಿ, ಪೂರ್ಣಿಮಾ ಪರ್ಯಂತ ಆ ಕರ್ಮವನ್ನಾಚರಿಸಿ, ದಾನ ಮೊದಲಾದ ಕರ್ಮಗಳಿಂದ ಆ ವ್ರತವನ್ನು ಸಮಾಪ್ತಿಗೊಳಿಸಬೇಕು.

ಬ್ರಹ್ಮಾದಿದೇವತೆಗಳೂ ಕೂಡ ವೈಶಾಖದ ಈ ಏಳು ದಿನಗಳಲ್ಲಿ ಈ ತೀರ್ಥಸ್ನಾನ ಹರಿಹರಸೇವನೆಗಳನ್ನು ಮಾಡಲು ಬಯಸುತ್ತಾರೆ. ಆದುದರಿಂದ ಎಲೌ ಮಗನೇ! ಈ ಕ್ಷೇತ್ರದಲ್ಲಿ ಸಪ್ತದಿನ ಸ್ನಾನದಾನಾದಿ ಸತ್ಕರ್ಮವು ಮನುಷ್ಯರಿಗೆ ಅನಂತಪುಣ್ಯಪ್ರದಾಯಕವು. ಮೋಕ್ಷಾದಿ ಪುರುಷಾರ್ಥಸಾಧಕವು.

ಹೆಚ್ಚೇನು, ಗದಾತೀರ್ಥಸ್ನಾನ, ಹರಿಹರದರ್ಶನ, ಪ್ರದಕ್ಷಿಣಾದಿ ಸೇವನ, ಕ್ಷೇತ್ರಮಾಹಾತ್ಮ್ಯಶ್ರವಣ, ರಥೋತ್ಸವದರ್ಶನ, ಇವುಗಳು ದೇವ–ಋಷಿ–ಪಿತೃಗಳ ಋಣಗಳನ್ನು ಪರಿಹರಿಸತಕ್ಕವು. ಇಹದಲ್ಲಿ ಇಷ್ಟಾರ್ಥವನ್ನೂ ಕೊನೆಗೆ ಮೋಕ್ಷವನ್ನೂ ಕೊಡತಕ್ಕವು."

ಸಹ್ಯಾದ್ರಿಪುರಾಣದ ತೀರ್ಥಕ್ಷೇತ್ರ(ತೀರ್ಥಬೈಲು)ಮಾಹಾತ್ಮ್ಯದ
ದ್ವಿತೀಯಾಧ್ಯಾಯದ ತಾತ್ಪರ್ಯವು ಸಂಪೂರ್ಣವು



## ಕ್ಷೇತ್ರಸನ್ನಿವೇಶ

ಈ ತೀರ್ಥಬೈಲು ಕ್ಷೇತ್ರಕ್ಕೆ ಪೂರ್ವಭಾಗದಲ್ಲಿ ಮೂಡಡುಗ್ರಾಮವಿದೆ. ದಕ್ಷಿಣದಲ್ಲಿ ಸೀತಾನದಿಯು. ಪಶ್ಚಿಮದಲ್ಲಿ ಕುಂದಾಪುರದಿಂದ ಉಡುಪಿಗೆ ಹೋಗುವ ರಾಜರಸ್ತೆ, ಸಾಸ್ತಾನ್ ಪೇಟೆಯು ಪೂರ್ವ ಒಂದು ಮೈಲು ದೂರದಲ್ಲಿದೆ. ಉತ್ತರದಲ್ಲಿ ಕೂಡ ಮೂಡಡುಗ್ರಾಮ. ಇವುಗಳ ನಡುವೆ ಈ ಕ್ಷೇತ್ರವಿರುತ್ತದೆ.

## ವಿಶೇಷೋತ್ಸವಗಳು

ಕಾರ್ತಿಕಾಮಾವಾಸ್ಯೆ ದೀಪೋತ್ಸವ, ಜ್ಯೇಷ್ಠದಲ್ಲಿ ಸಂಹಿತಾಭಿಷೇಕ-ರಂಗಪೂಜೆ, ಸಿಂಹ ಮಾಸದಲ್ಲಿ ಸೋಣಾರ್ತಿಗಳು, ಕುಂಭ ಮಾಸದ ಕೃಷ್ಣಪಕ್ಷ ಚತುರ್ದಶೀದಿನ ಮಹಾಶಿವರಾತ್ರಿ ವಿಶೇಷ ಪೂಜಾದಿಗಳು ನಡೆಯುವುವು.

## ವಿಶೇಷಸೇವೆಗಳು

1 ರಂಗಪೂಜೆ (ಸಂಹಿತಾಭಿಷೇಕಪೂರ್ವಕ ರಂಗಪೂಜೆ)
2 ಸಂಹಿತಾಭಿಷೇಕ (ರುದ್ರಾಭಿಷೇಕಪೂರ್ವಕ ರಂಗಪೂಜೆ, ರಂಗಪೂಜೆ ಮಾತ್ರ)
3 ರುದ್ರಾಭಿಷೇಕ (ಶತರುದ್ರ, ಏಕಾದಶ ರುದ್ರ-ಒಂದುದಿನದ ಅಭಿಷೇಕ)
4 ಪಂಚಾಮೃತಾಭಿಷೇಕ
5 ಹರಿವಾಣ ನೈವೇದ್ಯ
6 ಸೋಣಾರ್ತಿ
7 ಕರ್ಪೂರ ಮಂಗಳಾರ್ತಿ
8 ಸಾಮಾನ್ಯ ಕುಂಭಾಭಿಷೇಕ

ಅರ್ಚಕ: **ಸುಬ್ರಾಯ ಅಡಿಗ**
ತೀರ್ಥಬೈಲು ಶಂಕರನಾರಾಯಣ ದೇವಸ್ಥಾನ,
ಪಾಂಡೇಶ್ವರಗ್ರಾಮ, ಪೋಸ್ಟ್: **ಸಾಸ್ತಾನ.**
ಉಡುಪಿ ತಾಲೂಕು, ದಕ್ಷಿಣಕನ್ನಡ.

---

...ಕವು ಪಾವಂಜೆ ಗುರುರಾವ್ ಇವರ ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.
ಶಾ. ಶಕ ೧೮೬೯. P. I Card No. S. K. 69-1000-3-1947

ಸೌತ್ ಕೆನರಾ ಇಂಡಸ್ಟ್ರಿಯಲ್ ಎಂಡ್ ಎಗ್ರಿಕಲ್ಚರಲ್ ಎಗ್ಜಿಬಿಶನ್ನಿನಲ್ಲಿ

ಮೆಡಲನ್ನೂ, ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಿಂದಲೂ ಡಿಸ್ಟ್ರಿಕ್ಟ್ ಸರ್ಜನರಿಂದಲೂ
ಅನೇಕಾನೇಕ ಮಹನೀಯರುಗಳಿಂದಲೂ
ಸಿಫಾರಸು ಪತ್ರ (ಸರ್ಟಿಫಿಕೇಟು)ಗಳನ್ನೂ ಪಡೆದ,
ಹಾಗೂ ಶಾಸ್ತ್ರೀಯರೀತ್ಯಾ ತಯಾರಿಸಲ್ಪಟ್ಟು, ಬಾಣಂತಿಯರಾದ
ಸಾವಿರಾರು ಸ್ತ್ರೀಯರ ಜೀವವನ್ನು ಕಾಪಾಡಿದ

## 'ಪ್ರಸೂತ ಕಲ್ಯಾಣವಟಿ'ಯೆಂಬ

# ಬಾಣಂತಿಯರ ನಂಜಿನಮಾತ್ರೆಗಳು

ಪ್ರಸೂತವಾದನಂತರ ಸ್ತ್ರೀಯರಿಗೆ ಸೂತಿಕೋಪದ್ರವದಿಂದ ಸಂಭವಿಸಬಹುದಾದ ಸೂತಿಕಾಜ್ವರ, ಛಳಿ, ಸ್ಮೃತಿತಪ್ಪುವುದು(ನಂಜೇರುವುದು), ಗ್ರಹಣಿ, ಅತಿಸಾರ, ಶೂಲೆ, ಅತಿಸ್ರಾವ ಇಲ್ಲವೆ ಅಲ್ಪಸ್ರಾವ, ಬುದ್ಧಿಭ್ರಮಣೆಯಾಗುವದು ಇತ್ಯಾದಿ ಬಾಣಂತಿಯರ ಸಮಸ್ತ ದೋಷಗಳಿಗೂ ಸಂಜೀವನಸದೃಶವಾದ ಮಹೌಷಧ. ಪ್ರಸವವಾದಂದಿನಿಂದ ಹತ್ತು ದಿವಸಗಳವರೆಗೆ ಸದ್ರಿ ಮಾತ್ರೆಗಳನ್ನು ಸೇವಿಸುವುದರಿಂದ ಬಾಣಂತಿಯರಿಗೆ ಸಂಭವಿಸಬಹುದಾದ ಮೇಲೆ ಬರೆದ ಯಾವ ವಿಧದ ಬಾಧೆಗಳೂ ಬಾರದಂತೆ ಕಾಪಾಡುವುದು. ಸದ್ರಿ ಮಾತ್ರೆಗಳನ್ನು ಹತ್ತು ದಿವಸ ಉಪಯೋಗಿಸುವುದರಿಂದ ಬಾಣಂತಿಯರಿಗೆ (ಸದ್ರಿ ಹತ್ತು ದಿವಸಗಳಲ್ಲಿ) ಬೇರೆ ಯಾವುದೊಂದು ವಿಧವಾದ ಮದ್ದುಗಳೂ ಬೇಕಾಗಿಲ್ಲ.

ಅಲ್ಲದೆ, ಸದ್ರಿ ಮಾತ್ರೆಗಳು ಬಾಣಂತಿಯರಿಗೆ ಹೇಗೆ ಅಮೃತಪ್ರಾಯವಾದದ್ದೋ, ಹಾಗೆಯೇ ಅನುಪಾನವಿಶೇಷದಿಂದ ಕಠಿಣ ಸನ್ನಿಪಾತ, ನಿಮೋನಿಯಾಯೆಂಬ ಪುಪ್ಪುಸ ಸನ್ನಿಪಾತ, ಮಲೇರಿಯಾ, ವಿಷಮಜ್ವರ, ಏಕಾಹಿಕ, ದ್ವ್ಯಾಹಿಕ, ತ್ರ್ಯಾಹಿಕ, ಚಾತುರ್ಥಿಕ ಇತ್ಯಾದಿ ಜ್ವರಗಳಲ್ಲೂ, ಅತಿಸಾರ, ಜ್ವರಾತಿಸಾರ, ವಿಷೂಚಿಕಾ(ಕೊಲೆರಾ), ಬಾಲಗ್ರಹ, ಹಾವು ಚೇಳು ಜೇಡರಹುಳು (ಸಾಲಿಗ) ಇಲಿ ಮುಂತಾದ ವಿಷಜಂತುಗಳ ಕಡಿತ ಇತ್ಯಾದಿ ಅನೇಕ ಕಾಹಿಲೆಗಳಲ್ಲಿ ಅದ್ಭುತ ಗುಣದೊರೆಯುವುದಾದ ಪ್ರಯುಕ್ತ ಪ್ರತಿಯೊಂದು ಕುಟುಂಬವೂ ಸದ್ರಿ ಮಾತ್ರೆಗಳನ್ನು ಸಂಗ್ರಹದಲ್ಲಿಡುವುದರಿಂದ, ಬಹಳ ಪ್ರಯೋಜನವಾಗುವುದು. ಸದ್ರಿ ಮಾತ್ರೆಗಳನ್ನು ಬಾಟ್ಲಿಗಳಲ್ಲಿ ಹಾಕಿ ಬೂಚುಹಾಕಿ ಇಡುವುದರಿಂದ ನೂರಾರು ವರ್ಷಗಳಾದರೂ ಕೆಟ್ಟು ಹೋಗುವಸಂಭವವಿಲ್ಲ. ಬಾಣಂತಿಯರಿಗೆ ಹತ್ತು ದಿವಸಗಳಿಗೆ ನಲ್ವತ್ತು ಮಾತ್ರೆಗಳು ಬೇಕಾಗುವುವು. ಮಾತ್ರೆ ೧ರ ಒಂದಾಣೆ. 50 ಮಾತ್ರೆಗಳಿರುವ ಬಾಟ್ಲಿ ೧ರ ಬೆಲೆ ರೂ. 3—0—0

ಸವಿಸ್ತರ ಉಪಯೋಗವಿಧಾನ ಮಾತ್ರೆಯೊಂದಿಗೆ ರವಾನಿಸಲ್ಪಡುವದು.

**ನೇಟಿವ್ ಡಾಕ್ಟರ್ ಎಸ್. ಆರ್. ಪಾಂಡೇಶ್ವರ್,**
ರಿಜಿಸ್ಟರ್ಡ್ ಮೆಡಿಕಲ್ ಪ್ರಾಕ್ಟಿಶನರ್,
ಪೋಸ್ಟು: **ಸಾಸ್ತಾನ,** ದಕ್ಷಿಣಕನ್ನಡ ಜಿಲ್ಲಾ.